CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೨೪, ೨೦೦೫ (ಫಾಲ್ಗುಣ ೫, ಶಕ ವರ್ಷ ೧೯೨೬) | ಸಂಚಿಕೆ ೮

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಅವರ ಕಾರ್ಯಾಲಯ

### ವಾಹನಗಳ ಸಂಕ್ಷಿಪ್ತ ಟೆಂಡರ್ ಕಂ ಹರಾಜು ಪ್ರಕಟಣೆ

**ಸಂಖ್ಯೆ: ಎ2.ವಾಹನ.ಹರಾಜು.ಸಿಆರ್.1/2004-05, ದಿನಾಂಕ: 17ನೇ ಫೆಬ್ರವರಿ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಶಿವಮೊಗ್ಗ ಅರಣ್ಯ ಸಂಚಾರಿದಳ ಕಛೇರಿಯಲ್ಲಿ ಅರಣ್ಯ ಮೊಕದ್ದಮೆಯಲ್ಲಿ ಅಮಾನತ್ತು ಪಡಿಸಿ, ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡ ಈ ಕೆಳಕಂಡ ವಾಹನಗಳನ್ನು ಎಲ್ಲಿದೆಯೋ ಅಲ್ಲಿ ಹೇಗಿದೆಯೋ ಹಾಗೆ ಮೇಲ್ಕಂಡ ಕಛೇರಿಯ ಆವರಣದಲ್ಲಿ ದಿನಾಂಕ: 29.03.2005 ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟವರಿಂದಾಗಲೀ ನಿಗದಿತ ಷರತ್ತುಗಳಿಗೆ ಒಳಪಟ್ಟಂತೆ ಟೆಂಡರ್-ಕಂ-ಬಹಿರಂಗ ಹರಾಜು ಮಾಡಲಾಗುವುದು. ಇಷ್ಟವುಳ್ಳವರು ನಿಗದಿಪಡಿಸಿದ ಠೇವಣಿ ಹಣವನ್ನು ಮುಂಗಡವಾಗಿ ಕಟ್ಟಿ, ಟೆಂಡರ್-ಕಂ-ಬಹಿರಂಗ ಹರಾಜು ಪ್ರಕಟಣೆ ಷರತ್ತಿಗೆ ಅನುಗುಣವಾಗಿ ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

**ಅನುಸೂಚಿ**

| ಕ್ರ. ಸಂ. | ವಾಹನಗಳ ಮಾದರಿ | ನೋಂದಣಿ ಸಂಖ್ಯೆ | ಟೆಂಡರ್ ಮತ್ತು ಹರಾಜಿನ ದಿನಾಂಕ ಮತ್ತು ಸಮಯ |
|---|---|---|---|
| 1 | ಅಂಬಾಸಿಡರ್ ಕಾರು | C.T.Q. 4683 | ಟೆಂಡರ್ ದಿನಾಂಕ: 29.03.2005 ರಂದು ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 12 ಗಂಟೆಯವರೆಗೆ ಮತ್ತು ಹರಾಜು ಅದೇ ದಿನ ಮಧ್ಯಾಹ್ನ 1.00 ಗಂಟೆಯಿಂದ. |
| 2 | ಟಾಟಾ ಲಾರಿ | G.D.S. 6680 | |
| 3 | 407 ಮಿನಿ ಲಾರಿ | KA.21. 672 | |
| 4 | ಮೆಟಡೊರ್ ವ್ಯಾನ್ | KA.20. 2841 | |
| 5 | ಅಂಬಾಸಿಡರ್ ಕಾರು | C.R.W. 9957 | |
| 6 | ಅಂಬಾಸಿಡರ್ ಕಾರು | KA.03. M.3639 | |
| 7 | ಮಾರುತಿ ಓಮಿನಿ ವ್ಯಾನ್ | MH.04. Y.1155 | |
| 8 | ಮಾರುತಿ 800 ಕಾರು | KA.15. M.1225 | |
| 9 | ಎಲ್.ಎಂ.ಎಲ್.ವೆಸ್ಪಾ ಸ್ಕೂಟರ್ | KA.20. H. 2873 | |

**ಷರತ್ತುಗಳು:**

1. ಮೇಲೆ ತಿಳಿಸಿದ ವಾಹನಗಳ ಸಂಖ್ಯೆ ಕೇವಲ ಅಂದಾಜಿನದಾಗಿದ್ದು, ಮೇಲೆ ಹೆಸರಿಸಿದ ವಾಹನಗಳಲ್ಲಿ ಯಾವುದಾದರೂ ವಾಹನಗಳನ್ನು ಇಲಾಖಾ ಉಪಯೋಗಕ್ಕಾಗಿ ಹಂಚಿಕೆ ಮಾಡಿದಲ್ಲಿ ಅಥವಾ ನ್ಯಾಯಾಲಯದಿಂದ ತಡೆಯಾಜ್ಞೆ ಬಂದಲ್ಲಿ ಅಥವಾ ಇನ್ನಾವುದೇ ಕಾರಣಕ್ಕಾಗಿ ವಾಹನಗಳನ್ನು ಟೆಂಡರ್-ಕಂ-ಹರಾಜಿನಿಂದ ಕೈ ಬಿಡುವ ಅಧಿಕಾರ ಕೆಳ ಸಹಿದಾರರಿಗಿರುತ್ತದೆ.
2. ಪ್ರತಿಯೊಬ್ಬ ಬಿಡ್ಡುದಾರರು ವಾಹನದ ಬಿಡ್ಡಿಗೆ ರೂ.5000-00 ಮುಂಗಡ ಹಣವನ್ನು (ಇಎಂಡಿ) ಯನ್ನು ಹರಾಜು ಪ್ರಾರಂಭವಾಗುವುದಕ್ಕಿಂತ ಮುಂಚಿತವಾಗಿ ಪಾವತಿಸಿ ರಶೀದಿ ಪಡೆಯತಕ್ಕದ್ದು.

3. ಟೆಂಡರ್ ಕಂ ಹರಾಜಿನಲ್ಲಿ ಯಶಸ್ವಿಯಾದ ವ್ಯಕ್ತಿಗಳು ವಾಹನ ಖರೀದಿಸಿದ ಮೊತ್ತದ ಶೇ.50 ರಷ್ಟು ಹಣ ಮತ್ತು ಚಾಲ್ತಿ ದರದಲ್ಲಿ ಪೂರ್ಣ ತೆರಿಗೆಯನ್ನು ಹರಾಜು ಮುಗಿದ ಕೂಡಲೇ ಪಾವತಿ ಮಾಡತಕ್ಕದ್ದು.
4. ಟೆಂಡರ್ ಫಾರಂಗಳನ್ನು ನಿಗದಿತ ಬೆಲೆ ಹಾಗೂ ಚಾಲ್ತಿ ತೆರಿಗೆಯನ್ನು ಪಾವತಿಸಿ ದಿನಾಂಕ: 29.03.2005 ರಂದು ಬೆ.10.30 ರಿಂದ ಮ.12.00 ಗಂಟೆಯವರೆಗೆ ಈ ಕಛೇರಿಯಲ್ಲಿ ಪಡೆಯಬಹುದಾಗಿದೆ.
5. ಟೆಂಡರ್ ಫಾರಂಗಳನ್ನು ದಿನಾಂಕ: 29.03.2005 ರಂದು ಮಧ್ಯಾಹ್ನ 12.30 ಗಂಟೆಯವರೆಗೂ ಸ್ವೀಕರಿಸಲಾಗುವುದು. ಮ.1.00 ಗಂಟೆಯ ನಂತರ ಹರಾಜನ್ನು ಪ್ರಾರಂಭಿಸಲಾಗುವುದು. ಹರಾಜು ಮುಗಿದ ಕೂಡಲೇ ಸೀಲ್ಡ್ ಟೆಂಡರ್ ಲಕೋಟೆಗಳನ್ನು ತೆರೆಯಲಾಗುವುದು.
6. ಟೆಂಡರ್ ಹಾಗೂ ಹರಾಜಿಗೆ ಪ್ರತ್ಯೇಕ ಇ.ಎಂ.ಡಿ. ಕಟ್ಟತಕ್ಕದ್ದು.
7. ಇ.ಎಂ.ಡಿ. ಕಟ್ಟಿದ ವ್ಯಕ್ತಿಗಳಿಗೆ ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶ ಇರುತ್ತದೆ.
8. ಬಿಡ್ಡನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಎಲ್ಲಾ ಅಧಿಕಾರವು ಈ ಕೆಳಸಹಿದಾರರಿಗೆ ಇದ್ದು, ಅವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.
9. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಕೇಳಿ ಪಡೆಯಬಹುದು.

ಪಿ.ಆರ್. 103 ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

## ಮೀನುಗಾರಿಕೆ ನಿರ್ದೇಶನಾಲಯರವರ ಕಛೇರಿ, ಬೆಂಗಳೂರು

### ಪ್ರಕಟಣೆ ಸಂಖ್ಯೆ: ಸಿಬ್ಬಂದಿ-2:88:2004-05, ದಿನಾಂಕ: 4ನೇ ಫೆಬ್ರವರಿ 2005

**ವಿಷಯ:** ಮೀನುಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಒಂದು ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ.

**ಉಲ್ಲೇಖ:** 1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಟಿಸಿ 2001, ದಿನಾಂಕ: 21.11.2001 ಮತ್ತು 1.6.2002.
2) ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಸಿಬ್ಬಂದಿ(2):88:2004-05, ದಿನಾಂಕ: 20.8.2004.

ಮೇಲಿನ ಉಲ್ಲೇಖ (2) ರಲ್ಲಿರುವ ಅಧಿಸೂಚನೆಯನ್ವಯ ಮೀನುಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಒಂದು ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆ ಭರ್ತಿಗಾಗಿ ಬಂದ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ ಈ ಕೆಳಗಿನ ಅಭ್ಯರ್ಥಿಯ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ.

| ಅ. ಕ್ರಮ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ತಾತ್ಕಾಲಿಕವಾಗಿ ಆಯ್ಕೆ ಮಾಡಲಾದ ಹುದ್ದೆ | ಜನ್ಮ ದಿನಾಂಕ | ಪ್ರವರ್ಗ | ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳು | ಒಟ್ಟು |
|---|---|---|---|---|---|---|
| 1 | ಕುಮಾರಿ ಕೋಮಲ ಎ.<br>ತಂದೆ ಪಿ. ಅನಂತ ರಾಮ,<br>ನಂ.38 ಮೀನಾಕ್ಷಿ ದೇವಸ್ಥಾನ ರಸ್ತೆ,<br>ಶಿವಾಜಿನಗರ, ಬೆಂಗಳೂರು-51. | ಬೆರಳಚ್ಚುಗಾರ್ತಿ | 12.1.75 | ಪ. ಜಾತಿ | $\frac{341}{600} + \frac{165}{200}$ | 139.33 |
| | | | ಹೆಚ್ಚುವರಿ ಪಟ್ಟಿ | | | |
| 1) | ಕುಮಾರಿ ಎಂ.ಕೆ. ನಿರ್ಮಲ<br>ತಂದೆ ಕೃಷ್ಣಪ್ಪ, ಮನೆ ನಂ.161,<br>ಕುವೆಂಪು ನಗರ, ಪುಷ್ಪ<br>ಪಾಂಡುರಂಗ ಕಲ್ಯಾಣ ಮಂಟಪ<br>ಎದುರು, ಮಂಡ್ಯ-571401. | ಬೆರಳಚ್ಚುಗಾರ್ತಿ | 12.12.74 | ಪ.ಜಾತಿ | $\frac{375}{600} + \frac{152}{200}$ | 138.5 |

ಈ ಬಗ್ಗೆ ಸಂಬಂಧಪಟ್ಟವರು ಆಕ್ಷೇಪಣೆ ಅಥವಾ ತಕರಾರುಗಳು ಏನಾದರೂ ಇದ್ದಲ್ಲಿ ಅಗತ್ಯ ಪುರಾವೆ ದಾಖಲೆಗಳೊಂದಿಗೆ ಈ ಪ್ರಕಟಣೆಯ ದಿನಾಂಕದಿಂದ 30 ದಿವಸಗಳೊಳಗೆ ಈ ಕಛೇರಿಗೆ ಸಲ್ಲಿಸತಕ್ಕದ್ದು ಹೆಚ್ಚುವರಿ ಪಟ್ಟಿಯಲ್ಲಿರುವ ಅಭ್ಯರ್ಥಿಯನ್ನು ಮೊದಲನೆ ಪಟ್ಟಿಯಲ್ಲಿರುವ ಅಭ್ಯರ್ಥಿ ಕರ್ತವ್ಯಕ್ಕೆ ಹಾಜರಾಗದಿದ್ದರೆ ಮಾತ್ರ ನೇಮಕಾತಿಗೆ ಪರಿಗಣಿಸಲಾಗುವುದು.

ಪಿ.ಆರ್. 94 ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು.

## ಪೊಲೀಸ್ ಸೂಪರಿಂಟೆಂಡೆಂಟ್‌ರವರ ಕಛೇರಿ,
## ಪೊಲೀಸು ವಾಹನ ಚಾಲನಾ ತರಬೇತಿ ಮತ್ತು ನಿರ್ವಹಣಾ ಶಾಲೆ, ಯಲಹಂಕ, ಬೆಂಗಳೂರು-560 063

### ಪ್ರಕಟಣೆ ಸಂಖ್ಯೆ: ಪಿಡಿಎಂಎಸ್/ಎಂಡಿಎನ್/2004-05/660, ದಿನಾಂಕ: 14ನೇ ಫೆಬ್ರವರಿ 2005

**ವಿಷಯ:** ಪಿ.ಡಿ.ಎಂ.ಎಸ್. ಯಲಹಂಕಕ್ಕೆ ಒಂದು ವ್ಹೀಲ್ ಬ್ಯಾಲೆನ್ಸರ್ ಮತ್ತು ಒಂದು ವ್ಹೀಲ್ ಅಲೈನರ್ ಹಾಗೂ ಸಂಬಂಧಿತ ಬಿಡಿಭಾಗಗಳನ್ನು ಖರೀದಿಸುವ ಕುರಿತು.

ಈ ಮೂಲಕ ಸಾರ್ವಜನಿಕವಾಗಿ ಪ್ರಕಟಪಡಿಸುವುದೇನೆಂದರೆ, ಪೊಲೀಸ್ ವಾಹನ ಚಾಲನಾ ತರಬೇತಿ ಮತ್ತು ನಿರ್ವಹಣಾ ಶಾಲೆ, ಯಲಹಂಕಕ್ಕೆ ಒಂದು ವ್ಹೀಲ್ ಬ್ಯಾಲೆನ್ಸರ್ ಮತ್ತು ವ್ಹೀಲ್ ಒಂದು ಅಲೈನರ್ ಯೂನಿಟ್ ಮತ್ತು ಸಂಬಂಧಿತ ಬಿಡಿಭಾಗಗಳನ್ನು ಖರೀದಿಸಲು ಈ ಕೆಳಗೆ ನಮೂದಿಸಿದ ನಿಬಂಧನೆಗೊಳಪಟ್ಟು ಅಧಿಕೃತ ಮಾರಾಟಗಾರರಿಂದ ಟೆಂಡರನ್ನು ಆಹ್ವಾನಿಸಲಾಗಿದೆ. ಟೆಂಡರನ್ನು ದಿನಾಂಕ: 15.03.2005ರ ಸಾಯಂಕಾಲ 5 ಗಂಟೆಯ ಒಳಗಾಗಿ ಸಲ್ಲಿಸತಕ್ಕದ್ದು. ಅವಧಿಯ ನಂತರ ಯಾವುದೇ ಟೆಂಡರನ್ನು ಸ್ವೀಕರಿಸಲಾಗುವುದಿಲ್ಲ. ಟೆಂಡರನ್ನು ದಿನಾಂಕ: 16.03.2005ರ ಬೆಳಿಗ್ಗೆ 11.00 ಗಂಟೆಗೆ ತೆರೆಯಲಾಗುವುದು. ಟೆಂಡರ್ ಹಾಕಿದವರು ಟೆಂಡರ್ ಒಡೆಯುವ ಕಾಲಕ್ಕೆ ಹಾಜರಿರಬಹುದಾಗಿದೆ. ಹೆಚ್ಚಿನ ವಿವರ ಹಾಗೂ ನಿಬಂಧನೆಗೆ ಮತ್ತು ನಿಗದಿತ ಟೆಂಡರ್ ಫಾರಂಗಾಗಿ ಪಿ.ಡಿ.ಎಂ.ಎಸ್, ಯಲಹಂಕ, ಪೊಲೀಸ್ ಅಧೀಕ್ಷಕರು / ಕಛೇರಿಯವರನ್ನು ಕಛೇರಿಯ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ. ಅರ್ಜಿಯ ಬೆಲೆ ರೂ.150-00 (ಒಂದು ನೂರ ಐವತ್ತು ಮಾತ್ರ) ಆಗಿರುತ್ತದೆ.

**ಖರೀದಿಸುವ ಸಾಮಗ್ರಿಗಳ ವಿವರ:**

1. ವ್ಹೀಲ್ ಬ್ಯಾಲೆನ್ಸರ್ ಫೋಕಸ್ ಎಫ್-7 ಡಿಜಿಟಲ್ ವ್ಹೀಲ್ ಬ್ಯಾಲೆನ್ಸರ್ ವಿತ್‌ಔಟ್ ವುಡ್-1
2. ವ್ಹೀಲ್ ಅಲೈನರ್ 4-ಎಸ್, ವಿತ್ ಪಿ.ಸಿ., ಪ್ರಿಂಟರ್ ಮತ್ತು ಕ್ಯಾಬಿನೆಟ್-1
3. ಹೆಡ್‌ಲೈಟ್ ಬೀಮ್ ಅಲೈನರ್-1
4. ವರ್ಕ್ಸ್‌ಶಾಫ್ ಕ್ರೇನ್-1
5. ಫ್ರೀ ಸೆಟ್ ಟೈಪ್ ಡಿಜಿಟಲ್ ಟಯರ್ ಇನ್‌ಫ್ಲೇಟರ್ ಮಾಡೆಲ್ TICP-100, ವ್ಯಾಕ್ಸ್ ವಿತ್ 9.ಎಂ.ಎಂ. 6-ಕ್ಯಾರೆಕ್ಟರ್, ಡಾಟ್ ಮ್ಯಾಟ್ರಿಕ್, ಅಲ್ಫಾ ನ್ಯೂಮಾರಿಕ್ ಎಲ್.ಸಿ.ಡಿ. ವಿತ್ ಬ್ಯಾಕ್ ಲಿಟ್ ವಿತ್‌ಔಟ್ ರಿಮೋಟ್ ಕಂಟ್ರೋಲ್
6. ಫ್ರೀ ಸೆಟ್ ಟೈಪ್ ಡಿಜಿಟಲ್ ಟೈಯರ್ ಇನ್‌ಫ್ಲೇಟರ್ ಮಾಡೆಲ್ TICP 140, SNX, 2 x 3 ಡಿಜಿಟ್ 1 ಸೆವೆನ್ ಸೆಗ್‌ಮೆಂಟ್ ಎಲ್.ಸಿ.ಡಿ. ವಿತ್ ಬ್ಯಾಕ್‌ಲಿಟ್
7. ಎಲ್.ಜಿ. ಮೇಕ್ ಸ್ಕ್ರೂ ಆಟೋ ಲಿಫ್ಟ್
8. ಇಂಪೆಕ್ಟ್ ರಿಂಚ್ ಮಾಡೆಲ್ 1148 TRH
9. ರ್‍ಯಾಚಿಟ್ ರಿಂಚ್ ಮಾಡೆಲ್ 1133 TSX x /2
10. ಅಕ್ಸಸರೀಸ್ ಫಾರ್ ಪ್ಯೂನಿಮ್ಯಾಟಿಕ್ ಟ್ಯೂಲ್ಸ್ (SL.No.8 & 9)

ಪೊಲೀಸ್ ಸೂಪರಿಂಟೆಂಡೆಂಟ್,

ಪಿ.ಆರ್. 102 ರಕ್ಷಕ ವಾಹನ ಚಾಲನಾ ತರಬೇತಿ ಮತ್ತು ನಿರ್ವಹಣಾ ಶಾಲೆ, ಯಲಹಂಕ, ಬೆಂಗಳೂರು.

**IN THE COURT OF THE CITY CIVIL JUDGE AT BANGALORE**

**P&S.C.NO.21/2005**

Petitioner: 1) Smt. S.T. Pushpalatha, Aged about 52 years, D/o. Late Prof. S.L. Thimmaiah, No.10, Bell Rock Driver, kanata, Ontasio, CANADA K2K314.

2) Sri S.T. Prasad, Aged about 50 years, S/o Late Prof.S.L. Thimmaiah, No.11, Kiran, 1st Cross, C.R. Layout, J.P. Nagar, Bangalore-560 078.

3) S.T. Radheshyam, Aged about 44 years, S/o Late Prof. S.L. Thimmaiah,No.15, 7th Cross, I Main, Shakambari Nagar, J.P. Nagar, 1st Phase, Bangalore-560078.

**V/s**

Respondent: - Nil -

Whereas the petitioners have filed the petition under Section 372 of the Indian Succession act, to grant succession certificate to the estate of the deceased Prof. S.L. Thimmaiah who died on 20.2.2003 in respect of the items mentioned in the schedule hereunder in favour of the petititoners.

Anybody having any claim or rights over the schedule share certificates to appear in this court in person or by a pleader on the day of 19th March 2005 at 11 clock to answer the same. Failing which the petition will be disposed off exparte.

**SCHEDULE**

| Sl. No. | Name of the Company | No.of Shares |
|---|---|---|
| 1 | S & S Industries and Enterprises Limited, Madras-600 004. | 400 |
| 2 | Ferro-Concrete Co. (India) Limited, Dhar (MP) | 200 |
| 3 | BPL Sanyo Technologies Limited, Palghat-678 007. | 100 |
| 4 | Usha rectifier Corporation (India) Limited, New Delhi-110001. | 150 |
| 5 | Nippon Denro Ispat Limited, Calcutta-700 016. | 575 |
| 6 | Kothari (Madras) Limited, Madras-600034. | 100 |
| 7 | JVG Finance Limited, New Delhi-110 066. | 100 |
| 8 | Powmex Steels Limited, Orissa-767033. | 100 |
| 9 | Skyline Leather Industries Limited, Ranipet-632 403. | 200 |
| 10 | Nova R.G. (Group), Nova Iron & Steel Limited, New Delhi-110 064. | 100 |
| 11 | HB Stock Holdings Limited, New Delhi-110008. | 50 |
| 12 | Canbay Polyfilms Limited, Bangalore-560025. | 200 |
| 13 | Kedia Electricals Limited, Hyderabad-500 037. | 100 |
| 14 | Hotfland Remedies Limited, New Delhi-110008. | 100 |
| 15 | Noble Explochem Limited, Nagpur-440 010. | 100 |
| 16 | J.K. Industries Limited, Calcutta-700 001. | 300 |
| 17 | Nagarjuna Fertilizers & Chemicals Limited, Hyderabad-500482. | 200 |
| 18 | Transmatic Systems Limited, Trivendram-695041. | 100 |

| Sl. No. | Name of the Company | | No.of Shares |
|---|---|---|---|
| 19 | Elcot Growth Finance Limited, Madras-600008. | | 200 |
| 20 | Gujarat Ambuja Proteins Limited, Ahmadabad-380013. | | 120 |
| 21 | Gujarath Ambuja Exports Limited, Ahmedabad-380 014. | | 60 |
| 22 | Falcon Tyres Limited, Bangalore-560025. | | 200 |
| 23 | Float Glass India Limited, Taloja 410 208, Maharashtra. | | 100 |
| 24 | Penta Four Products Limited, Madras-600024. | | 600 |
| 25 | Raunaq Automotive Components Limited, New Delhi-110 019. | | 200 |
| 26 | Sagar Cements Limited, Hyderabad-500 034. | | 208 |
| 27 | SIV Industries Limited, Coimbatore-641 018 | | 150 |
| 28 | DCM DAEWOO, Motors Limited (Formerly DCM Toyota Limited), New Delhi-110 001) | | 650 |
| 29 | Lloyds Steel Industries Limited, Bombay-400 021. | | 264 |
| 30 | South India Viscose Limited, Coimbatore-641018. | | 50 |
| 31 | Dharani Sugars and Chemicals Limited, Madras-600018. | | 200 |
| 32 | Mangalore Refinary and Petrochemicals Limtied, Bangalore-560023. | | 200 |
| 33 | Nexus Software Limited, Baroda-390019 | | 200 |
| 34 | Morgan Stanley Mutualfund, Bombay-400021. | | 300 |
| 35 | Godrej Soaps Limited, Gujarath-393 135. | | 10 |
| 36 | Philips Carbon Block Limited, Calcutta-700 001. | | 550 |
| 37 | Yenepoya Minerals & Granites Limited, Bangalore-560 001. | | 300 |
| 38 | HB Portfolio Leasing Limited, New Delhi-110 008. | | 200 |
| 39 | Modern Syntex (India) Limited, Jaipur-302 004. | | 300 |
| 40 | Gwalior Poly Pipes Limited, Malanpur 477 116, Madhya Pradesh. | | 350 |
| 41 | Ebers Pharmaceuticals Limited, Bombay-400001. | | 100 |
| 42 | Moolchand Exports Limited, Madras-600018. | | 100 |
| 43 | Agro Chemicals Punjab Limited, Chandigarh-161 101. | | 100 |
| 44 | Unimade Overseas Limited, New Delhi-110 048 | | 100 |
| 45 | Jolly Plastic Industries Limited, Dhoraji-360 401, Gujarath. | | 100 |
| 46 | HB Estate Developers Limited, New Delhi-110 008. | | 25 |
| 47 | Good Earth Organic (India) Limited, Bombay-400037. | | 200 |
| 48 | Lan Eseda Industries Limited, Hyderabad-500001. | | 200 |
| 49 | Over Seas cables Limited, Patiala, Punjab. | | 300 |
| 50 | Pace Elcot Automation Limited, Madras-600 008. | | 600 |
| 51 | Kothari Industrial Corporation Limited, Madras-600034. | | 110 |
| 52 | Apollo Tyres Ltd., Cochin-682 031, Kerala. | | 25 |
| 53 | Nirup Synchrome Limited, Hyderabad-500 029. | | 250 |
| 54 | White Diamond Industries Limited, Bombay-400 011. | | 100 |
| 55 | Utility engineers (India) Limited, New Delhi-110 017. | | 100 |
| 56 | H.B. Portfolio Limited, New Delhi-110 008. | | 25 |
| 57 | Lloyds Steel Industries Limited, Bombay-400 021. | | 768 |
| 58 | ISIN INE 458A01012 | Bank of Punjab Eq. | 500.00 |
| 59 | ISIN INE 476A01014 | Canara Bank Eq. | 1,000.00 |
| 60 | ISIN INE 083A01026 | Morepen Lab Eq. F.V. Rs.2 | 500.00 |
| 61 | ISIN INE 605A01018 | Pricol Eq.k Eq.Rs.1 | 1,500.00 |
| 62 | ISIN INE 002A01018 | Reliance Eq. | 100.00 |
| 63 | ISIN INE 639B01015 | Tanfac Indust. Eq | 200.00 |
| 64 | ISIN INE 280A01010 | Titan INDS Eq. | 500.00 |
| 65 | ISIN INE 139B01016 | Ucal Fuel Syste Eq. | 300.00 |
| 66 | ISIN INE 605A01026 | Pricol Eq. Eew Fv Re.1 | 1,500.00 |

Given under my hand and seal of the Court on 17th day of February 2005

PD-27

Assistant Registrar, City Civil Court, Bangalore.

**ಲೋಕೋಪಯೋಗಿ ಇಲಾಖೆ (ರಾಷ್ಟ್ರೀಯ ಹೆದ್ದಾರಿ)**

**ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಅಶೋಕ ನಗರ, ಮಂಗಳೂರು-575006**

**ಅಲ್ಪಾವಧಿ ಟೆಂಡರ್ ಅಧಿಸೂಚನೆ (ಎರಡು ಲಕೋಟೆ ಪದ್ಧತಿಯಲ್ಲಿ)**

**ಸಂಖ್ಯೆ: ರಾಹೆವಿ:ಮಂ:ಇಎ-1:ಎಮ್.ಎಮ್.ಕೆ:ಎನ್.ಐ.ಟಿ:2004-05:7879, ದಿನಾಂಕ: 10ನೇ ಫೆಬ್ರವರಿ 2005**

ಮೊಹರು ಮಾಡಿದ ಲಕೋಟೆಗಳಲ್ಲಿ "ಐಟಂ ವಾರು" ಟೆಂಡರುಗಳನ್ನು ಈ ಕೆಳಗಿನ ತಃಖ್ತೆಯಲ್ಲಿ ನಮೂದಿಸಲಾದ ಕಾಮಗಾರಿಗಳಿಗೆ "ಎರಡು ಲಕೋಟೆ ಪದ್ಧತಿಯಲ್ಲಿ" ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ಹಾಗೂ ಆಕ್ಟ್ 2000ದ ಪ್ರಕಾರ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಣಿಯಾದ 1ನೇ ದರ್ಜೆ ಗುತ್ತಿಗೆದಾರರಿಂದ ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಎರಡು ಲಕೋಟೆ ಟೆಂಡರ್‌ನ್ನು "ತಾಂತ್ರಿಕ ಬಿಡ್" (ಟೆಕ್ನಿಕಲ್ ಬಿಡ್) ಮತ್ತು "ಹಣಕಾಸಿನ ಬಿಡ್" (ಫೈನಾನ್ಸಿಯಲ್ ಬಿಡ್) ಎಂದು ಪರಿಗಣಿಸಲಾಗಿದೆ. ತಾಂತ್ರಿಕ ಬಿಡ್ ಮತ್ತು ಹಣಕಾಸಿನ ಬಿಡ್‌ನ್ನು ಪ್ರತ್ಯೇಕವಾಗಿ ಮೊಹರು ಮಾಡಿ, ಕಾಮಗಾರಿಯ ವಿವರ, ಗುತ್ತಿಗೆದಾರರ ಪೂರ್ಣ ವಿಳಾಸದ ವಿವರ ದಾಖಲಿಸಿ, ಎರಡನ್ನೂ ಒಂದೇ ಲಕೋಟೆಯಲ್ಲಿ ಹಾಕಿ ಮೊಹರು ಮಾಡಿ ಅಧೀಕ್ಷಕ ಇಂಜಿನಿಯರ್‌ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವೃತ್ತ, ಕೆ.ಆರ್. ವೃತ್ತ, ಬೆಂಗಳೂರು ಇಲ್ಲಿ ಅಥವಾ ಕಾರ್ಯಕಾರಿ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಉರ್ವಸ್ಟೋರ್, ಮಂಗಳೂರು ಇಲ್ಲಿ ದಿನಾಂಕ: 17.03.2005ರ ಅಪರಾಹ್ನ 4.00 ಘಂಟೆಯವರೆಗೆ ಸ್ವೀಕರಿಸಲಾಗುವುದು, ಮತ್ತು ಕರ್ನಾಟಕ ಪಬ್ಲಿಕ್ ವರ್ಕ್ಸ್ ಡಿ'ಕೋಡ್ ವಾ. 11 ಪಿ.ಡಬ್ಲ್ಯೂ.ಜಿ. 65 ಮತ್ತು 66 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ಹಾಗೂ ಆಕ್ಟ್ 2000ದ ಪ್ರಕಾರ ನಿಯಮಗಳನ್ನು ಪಾಲಿಸಲಾಗುವುದು. ತಾಂತ್ರಿಕ ಬಿಡ್‌ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ತೆರೆಯಲಾಗುವುದು ಹಾಗೂ ಸದರಿ ದಿನಾಂಕವು ಆಕಸ್ಮಿಕವಾಗಿ ಸಾರ್ವಜನಿಕ ರಜಾ ದಿನವಾಗಿದ್ದಲ್ಲಿ, ತದನಂತರದ ದಿನಾಂಕವನ್ನು ಟೆಂಡರ್ ತೆರೆಯಲು ಪರಿಗಣಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ತೇರ್ಗಡೆಯಾದ ಗುತ್ತಿಗೆದಾರರ ಹಣಕಾಸಿನ ಬಿಡ್‌ನ್ನು ಮಾತ್ರ ಮುಂದೆ ತಿಳಿಸಲಿರುವ ದಿನಾಂಕದಂದು ತೆರೆಯಲಾಗುವುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿ ಗಿಟ್ಟಿರುವ ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. ಮೊತ್ತ ರೂ.ಗಳಲ್ಲಿ | ಟೆಂಡರ್ ದಾಖಲೆಗಳ ಮೌಲ್ಯ ರೂ.ಗಳಲ್ಲಿ ಹಿಂದಿರುಗಿಸ ಲಾಗುವುದಿಲ್ಲ (ತೆರಿಗೆಗಳು ಸೇರಿ) | ಕೆಲಸದ ಮಾದರಿ | ಕೆಲಸ ಮುಗಿಸುವ ಕಾಲಾವಧಿ (ಮಳೆಗಾಲ ಸೇರಿ) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಚನ್ನರಾಯಪಟ್ಟಣ ಮತ್ತು ಕೆ.ಆರ್.ಪೇಟೆ ಮಾರ್ಗವಾಗಿ ಪಾಂಡವಪುರ ರೈಲ್ವೇ ಸ್ಟೇಶನ್‌ನಿಂದ ಅರಸೀಕೆರೆ ರೈಲ್ವೇ ಸ್ಟೇಶನ್ ವರೆಗಿನ ರಸ್ತೆ (SH-7) ಯನ್ನು ಅಗಲಗೊಳಿಸುವುದು ಮತ್ತು ಬಲಪಡಿಸುವುದು. **ಪ್ಯಾಕೇಜ್ ನಂ.1** | 3,65,08,600 | 3,65,100 | 30,000 | ಮಣ್ಣಿನ ಕೆಲಸ: ಡಬ್ಲ್ಯೂ.ಬಿ.ಎಂ.: ಬಿ.ಎಂ: ಎಸ್.ಡಿ.ಬಿ.ಸಿ. | 8 ತಿಂಗಳು |
| 2 | ಚನ್ನರಾಯಪಟ್ಟಣ ಮತ್ತು ಕೆ.ಆರ್.ಪೇಟೆ ಮಾರ್ಗವಾಗಿ ಪಾಂಡವಪುರ ರೈಲ್ವೇ ಸ್ಟೇಶನ್‌ನಿಂದ ಅರಸೀಕೆರೆ ರೈಲ್ವೇ ಸ್ಟೇಶನ್ ವರೆಗಿನ ರಸ್ತೆ (SH-7) ಯನ್ನು ಅಗಲಗೊಳಿಸುವುದು ಮತ್ತು ಬಲಪಡಿಸುವುದು. **ಪ್ಯಾಕೇಜ್ ನಂ.2** | 3,52,49,800 | 3,52,500 | 30,000 | ಮಣ್ಣಿನ ಕೆಲಸ: ಡಬ್ಲ್ಯೂ.ಬಿ.ಎಂ.: ಬಿ.ಎಂ: ಎಸ್.ಡಿ.ಬಿ.ಸಿ. | 8 ತಿಂಗಳು |
| 3 | ಚನ್ನರಾಯಪಟ್ಟಣ ಮತ್ತು ಕೆ.ಆರ್.ಪೇಟೆ ಮಾರ್ಗವಾಗಿ ಪಾಂಡವಪುರ ರೈಲ್ವೇ ಸ್ಟೇಶನ್‌ನಿಂದ ಅರಸೀಕೆರೆ ರೈಲ್ವೇ ಸ್ಟೇಶನ್ ವರೆಗಿನ ರಸ್ತೆ (SH-7) ಯನ್ನು ಅಗಲಗೊಳಿಸುವುದು ಮತ್ತು ಬಲಪಡಿಸುವುದು. **ಪ್ಯಾಕೇಜ್ ನಂ.3** | 3,32,62,600 | 3,32,700 | 30,000 | ಮಣ್ಣಿನ ಕೆಲಸ: ಡಬ್ಲ್ಯೂ.ಬಿ.ಎಂ.: ಬಿ.ಎಂ: ಎಸ್.ಡಿ.ಬಿ.ಸಿ. | 8 ತಿಂಗಳು |
| 4 | ಚನ್ನರಾಯಪಟ್ಟಣ ಮತ್ತು ಕೆ.ಆರ್.ಪೇಟೆ ಮಾರ್ಗವಾಗಿ ಪಾಂಡವಪುರ ರೈಲ್ವೇ ಸ್ಟೇಶನ್‌ನಿಂದ ಅರಸೀಕೆರೆ ರೈಲ್ವೇ ಸ್ಟೇಶನ್ ವರೆಗಿನ ರಸ್ತೆ (SH-7) ಯನ್ನು ಅಗಲಗೊಳಿಸುವುದು ಮತ್ತು ಬಲಪಡಿಸುವುದು. **ಪ್ಯಾಕೇಜ್ ನಂ.4** | 2,77,77,100 | 2,77,800 | 20,000 | ಮಣ್ಣಿನ ಕೆಲಸ: ಡಬ್ಲ್ಯೂ.ಬಿ.ಎಂ.: ಬಿ.ಎಂ: ಎಸ್.ಡಿ.ಬಿ.ಸಿ. | 8 ತಿಂಗಳು |
| 5 | ಚನ್ನರಾಯಪಟ್ಟಣ ಮತ್ತು ಕೆ.ಆರ್.ಪೇಟೆ ಮಾರ್ಗವಾಗಿ ಪಾಂಡವಪುರ ರೈಲ್ವೇ ಸ್ಟೇಶನ್‌ನಿಂದ ಅರಸೀಕೆರೆ ರೈಲ್ವೇ ಸ್ಟೇಶನ್ ವರೆಗಿನ ರಸ್ತೆ (SH-7) ಯನ್ನು ಅಗಲಗೊಳಿಸುವುದು ಮತ್ತು ಬಲಪಡಿಸುವುದು. **ಪ್ಯಾಕೇಜ್ ನಂ.5** | 2,66,41,400 | 2,66,500 | 20,000 | ಮಣ್ಣಿನ ಕೆಲಸ: ಡಬ್ಲ್ಯೂ.ಬಿ.ಎಂ.: ಬಿ.ಎಂ: ಎಸ್.ಡಿ.ಬಿ.ಸಿ. | 8 ತಿಂಗಳು |

| 1 | 2 | 3 | 4 | 5 | 6 | 7 |
|---|---|---|---|---|---|---|
| 6 | ಶ್ರವಣಬೆಳಗೊಳದಿಂದ-ಚನ್ನರಾಯಪಟ್ಟಣ ದವರೆಗಿನ (SH-8) ಕೆ.ಮೀ. 18.00 ರಿಂದ 29.00 ರವರೆಗೆ ಅಗಲಗೊಳಿಸುವುದು ಮತ್ತು ಬಲಪಡಿಸುವುದು. | 4,06,00,000 | 4,06,000 | 30,000 | ಮಣ್ಣಿನ ಕೆಲಸ: ಡಬ್ಲ್ಯೂ.ಬಿ.ಎಂ.: ಬಿ.ಎಂ: ಎಸ್.ಡಿ.ಬಿ.ಸಿ. | 8 ತಿಂಗಳು |
| 7 | ಮಟ್ಟನವಿಲೆ-ಶ್ರವಣಬೆಳಗೊಳ ರಸ್ತೆ ಕಿ.ಮೀ. 12.00 ರಿಂದ 23.00 ರವರೆಗೆ ರಸ್ತೆ ಹಾಗೂ ಗ್ರಾಮದ ಕೂಡು ರಸ್ತೆಗಳನ್ನು ಅಗಲಗೊಳಿಸುವುದು ಮತ್ತು ಬಲಪಡಿಸುವುದು. | 3,15,38,700 | 3,15,400 | 30,000 | ಮಣ್ಣಿನ ಕೆಲಸ: ಡಬ್ಲ್ಯೂ.ಬಿ.ಎಂ.: ಬಿ.ಎಂ: ಎಸ್.ಡಿ.ಬಿ.ಸಿ. | 8 ತಿಂಗಳು |

**ಷರತ್ತುಗಳು:**

1) ಪ್ರಿಕ್ವಾಲಿಫಿಕೇಶನ್ ಅವಶ್ಯಕತೆಗಳನ್ನು ತಾಂತ್ರಿಕ ಬಿಡ್‌ನಲ್ಲಿ ತಿಳಿಸಲಾಗಿದೆ. ಪ್ರತಿಯೊಬ್ಬ ಅರ್ಜಿದಾರ ಗುತ್ತಿಗೆದಾರನೂ ಈ ಕೆಳಗೆ ವಿವರಿಸಿದ ಯಂತ್ರೋಪಕರಣಗಳನ್ನು ಹೊಂದಿದ್ದು ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಯವರಿಂದ ದೃಢೀಕರಿಸಿ ಅರ್ಜಿಸಲ್ಲಿಸುವ ಸಮಯದಲ್ಲೇ ಸಲ್ಲಿಸಬೇಕು. ಇಲ್ಲವಾದಲ್ಲಿ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

| ಕ್ರ.ಸಂ. | ಯಂತ್ರೋಪಕರಣಗಳು | ಸಂಖ್ಯೆ | ಲಗತ್ತಿಸಬೇಕಾದ ದಾಖಲೆಗಳ ವಿವರ |
|---|---|---|---|
| 1) | '40 ರಿಂದ 60' ಕ್ಕಿಂತ ಹೆಚ್ಚಿನ ಟಿ.ಪಿ.ಎಚ್. ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್' (ಎಂ.ಓ.ಆರ್.ಟಿ. ಅಂಡ್ ಹೆಚ್ ಯವರ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | 1 | ಸ್ವಂತಕ್ಕೆ ಖರೀದಿಸಿದ ಇನ್‌ವಾಯ್ಸ್/ಖರೀದಿ ಕರಾರು ಪತ್ರ ಮೂಲ ಇನ್‌ವಾಯ್ಸ್‌ನ ದೃಢೀಕೃತ ನಕಲಿನೊಂದಿಗೆ (ಮಾರಾಟ ಮಾಡಿದವನಿಂದ) |
| 2) | ಪೇವರ್ ಫಿನಿಶರ್ | 1 | - ಅದೇ - |
| 3) | ಮೆಕ್ಯಾನಿಕಲ್ ಸ್ಪ್ರೇಯರ್ | 2 | - ಅದೇ - |
| 4) | ವೈಬ್ರೇಟರಿ ರೋಡ್ ರೋಲರ್ | 1 | - ಅದೇ - |
| 5) | ಸ್ಟ್ಯಾಟಿಕ್ ರೋಡ್ ರೋಲರ್ | 2 | - ಅದೇ - |
| 6) | ಎಕ್ಸ್‌ಕವೇಟರ್ | 1 | - ಅದೇ - |
| 7) | ಟಿಪ್ಪರ್ಸ್ | 8 | ಸಾರಿಗೆ ಕಛೇರಿಯ ರಿಜಿಸ್ಟ್ರೇಷನ್ ಸರ್ಟಿಫಿಕೇಟ್‌ನ ದೃಢೀಕೃತ ಯಥಾ ನಕಲು. |

2) ಆಸಕ್ತಿಯುಳ್ಳ ಅರ್ಹ ಗುತ್ತಿಗೆದಾರರು, ತಮ್ಮ ಅರ್ಜಿಯನ್ನು ಕಾಂಟ್ರಾಕ್ಟ್ ರಿಜಿಸ್ಟ್ರೇಷನ್ ಯಥಾ ನಕಲು ಮತ್ತು ನಿಗದಿತ ಹಣವನ್ನು ಕಾರ್ಯಕಾರಿ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇಲ್ಲಿ ಡಿಮಾಂಡ್ ಡ್ರಾಫ್ಟ್ ಮುಖಾಂತರ ನೀಡಿದಲ್ಲಿ ಸ್ವೀಕರಿಸಲಾಗುವುದು. ಮೇಲಿನ ಅಡಕಗಳಿಲ್ಲದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲ.

3) ತಃಖ್ತೆಯ ಕಲಂ (6) ರಲ್ಲಿ ನಮೂದಿಸಿರುವ ಮಾದರಿಯ ರಸ್ತೆ ಕಾಮಗಾರಿಗಳನ್ನು ಅರ್ಜಿದಾರ ಗುತ್ತಿಗೆದಾರನು ಟೆಂಡರಿಗಿಟ್ಟ ಮೊಬಲಗಿನ ಶೇಕಡಾ 30ರ ಮೊತ್ತಕ್ಕೆ (ವಾರ್ಷಿಕ ಶೇ.10ರ ಹೆಚ್ಚುವರಿಯಂತೆ) ಹಿಂದಿನ 5 ವರ್ಷಗಳ ಯಾವುದಾದರೂ ಒಂದು ಆರ್ಥಿಕ ಸಾಲಿನಲ್ಲಿ ಮಾಡಿರತಕ್ಕದ್ದು, ಅಥವಾ ಗುತ್ತಿಗೆದಾರರು ಇದೇ ಮಾದರಿಯ ಕೆಲಸಗಳನ್ನು ಹಾಲೀ ಆರ್ಥಿಕ ವರ್ಷದಲ್ಲಿ ಕನಿಷ್ಠ ಶೇ.30ರ ಮೊತ್ತದಷ್ಟನ್ನು ಪೂರ್ಣಗೊಳಿಸಿರಬೇಕು. ಇದನ್ನು ತಾಂತ್ರಿಕ ಬಿಡ್‌ನಲ್ಲಿ ದಾಖಲಿಸತಕ್ಕದ್ದು. ಕಾಮಗಾರಿ ಕೈಗೊಂಡಿರುವ ಅನುಭವದ ಬಗ್ಗೆ ದೃಢೀಕರಣ ಪತ್ರವನ್ನು, ಅಗತ್ಯ ಮಾಹಿತಿ, ದಿನಾಂಕದೊಂದಿಗೆ, ತಾಂತ್ರಿಕ ಬಿಡ್‌ನಲ್ಲಿ ಲಗತ್ತಿಸಬೇಕು. ತಪ್ಪಿದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು.

4) ತಃಖ್ತೆಯಲ್ಲಿ ನಮೂದಿಸಿರುವ ಕಾಮಗಾರಿಗೆ, ಶೇಕಡಾ 50 ರಷ್ಟು ಪ್ರಮಾಣದ ಮೊತ್ತಕ್ಕೆ ಹಣಕಾಸಿನ ವ್ಯವಸ್ಥೆಯ ಬಗ್ಗೆ ಯಾವುದಾದರೂ ಶೆಡ್ಯೂಲ್ ಬ್ಯಾಂಕಿನಿಂದ "ಲೈನ್ ಆಫ್ ಕ್ರೆಡಿಟ್" ಪಡೆದು ತಾಂತ್ರಿಕ ಬಿಡ್‌ನಲ್ಲಿ ದೃಢೀಕರಿಸಿ ನಿಗದಿತ ನಮೂನೆಯಲ್ಲಿ ಲಗತ್ತಿಸತಕ್ಕದ್ದು, ಲಗತ್ತಿಸದಿದ್ದಲ್ಲಿ, ಟೆಂಡರನ್ನು ಸ್ವೀಕರಿಸಲಾಗುವುದಿಲ್ಲ.

5) ತಃಖ್ತೆಯಲ್ಲಿ ನಮೂದಿಸಿದ ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಅಥವಾ ಶೆಡ್ಯೂಲ್ ಬ್ಯಾಂಕಿನಿಂದ ಡಿಡಿ/ಬ್ಯಾಂಕರ್ಸ್ ಚೆಕ್/ಎಫ್‌ಡಿಆರ್/ಬ್ಯಾಂಕ್ ಗ್ಯಾರಂಟಿ/ಎನ್‌ಎಸ್‌ಸಿ (ಕಾರ್ಯಕಾರಿ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇವರ ಹೆಸರಿಗೆ ಒತ್ತೆಯಿಟ್ಟು) ಮೂಲಕ ಪಡೆದು **ತಾಂತ್ರಿಕ ಬಿಡ್‌ನೊಂದಿಗೆ ಇಡತಕ್ಕದ್ದು.** ಬ್ಯಾಂಕ್ ಗ್ಯಾರಂಟಿಯನ್ನು ಪಿಡಬ್ಲ್ಯೂಜಿ 66 ರಲ್ಲಿ ನಿಗದಿಪಡಿಸಿದ ನಮೂನೆಯಲ್ಲೇ ಲಗತ್ತಿಸತಕ್ಕದ್ದು, ಪಿಡಬ್ಲ್ಯೂಜಿ 66 ರಲ್ಲಿ ನಮೂದಿಸಿದ ಅವಧಿಗೆ ಇ.ಎಂ.ಡಿ.ಯನ್ನು ನೀಡತಕ್ಕದ್ದು. ಮೇಲಿನ ಷರತ್ತುಗಳಿಗನುಗುಣವಾಗಿ ಇ.ಎಂ.ಡಿ.ಯು ಇಲ್ಲವಾದಲ್ಲಿ ಅಂತಹ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.

6) ನಿಗದಿಪಡಿಸಿದ ದಿನಾಂಕಗಳು:

ಅ) ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ : 05.03.2005 (ಕಛೇರಿ ಕೆಲಸದ ಅವಧಿಯಲ್ಲಿ)

ಆ) ಖಾಲಿ ಟೆಂಡರು ಶೆಡ್ಯೂಲ್‌ಗಳನ್ನು ವಿತರಿಸುವ ದಿನಾಂಕ : 11.03.2005 (ಕಛೇರಿ ಕೆಲಸದ ಅವಧಿಯಲ್ಲಿ)

ಇ) ಭರ್ತಿ ಮಾಡಿದ ಟೆಂಡರನ್ನು ಸ್ವೀಕರಿಸುವ ಕೊನೆ ದಿನಾಂಕ: (ತಾಂತ್ರಿಕ ಹಾಗೂ ಆರ್ಥಿಕ ಬಿಡ್) : 17.03.2005 (ಸಂಜೆ 4.00 ಘಂಟೆಯವರೆಗೆ)

ಈ) ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ : 17.03.2005 (ಸಂಜೆ 4.30 ಘಂಟೆ) (ಸಾಧ್ಯವಾದಲ್ಲಿ)

7) ಲಗತ್ತಿಸಿರುವ ಎಲ್ಲಾ ದಾಖಲೆಗಳನ್ನು ಜಿಲ್ಲಾಮಟ್ಟದ ಅಧಿಕಾರಿಯವರಿಂದ ದೃಢೀಕರಿಸಿರಬೇಕು. ಮೂಲ ದಾಖಲೆಗಳನ್ನು ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕದಂದು ತಪ್ಪದೇ ಪರಿಶೀಲನೆಗಾಗಿ ಹಾಜರುಪಡಿಸಬೇಕು ತಪ್ಪಿದಲ್ಲಿ ಟೆಂಡರನ್ನು ಅಂಗೀಕರಿಸಲಾಗುವುದಿಲ್ಲ.

8) ತಾಂತ್ರಿಕ ಬಿಡ್‌ನಲ್ಲಿ ತೇರ್ಗಡೆಯಾದ ಗುತ್ತಿಗೆದಾರರ, ಫೈನಾನ್ಸಿಯಲ್ ಬಿಡ್ಡನ್ನು ಮುಂದೆ ತಿಳಿಸಲಾಗುವ ದಿನಾಂಕ ಹಾಗೂ ಸಮಯದಲ್ಲಿ ಕಾರ್ಯಕಾರಿ ಇಂಜಿನಿಯರ್‌ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇಲ್ಲಿ ತೆರೆಯಲಾಗುವುದು.

9) ಕೇವಲ ಅಗತ್ಯವಿರುವ ಸಂಬಂಧಪಟ್ಟ ದಾಖಲೆಗಳನ್ನು ಮಾತ್ರ ತಾಂತ್ರಿಕ ಬಿಡ್‌ನಲ್ಲಿ ಒದಗಿಸಬೇಕು. ಕಂಪೆನಿಯ ಇತರೆ ಅನಗತ್ಯ ವಿವರಗಳನ್ನು ಲಗತ್ತಿಸದಿರಲು ಸೂಚಿಸಿದೆ.
10) ಯಾವುದೇ ಕಾರಣ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರನ್ನು ತಿರಸ್ಕರಿಸುವ ಹಕ್ಕನ್ನು ಸಂಬಂಧಪಟ್ಟ ಅಧಿಕಾರಿಯು ಕಾಯ್ದಿರಿಸಿ ಕೊಂಡಿರುತ್ತಾರೆ.
11) ಜಾಯಿಂಟ್ ವೆಂಚರ್ ಅನ್ವಯಿಸುವುದಿಲ್ಲ.

ಹೆಚ್ಚಿನ ವಿವರಗಳು ಬೇಕಾಗಿದ್ದಲ್ಲಿ ಕಛೇರಿಯ ಕೆಲಸದ ಅವಧಿಯಲ್ಲಿ ಸಂಬಂಧಪಟ್ಟವರನ್ನು ಸಂಪರ್ಕಿಸಿ ಪಡೆದುಕೊಳ್ಳಬಹುದು.

ಪಿ.ಆರ್. 108 ಎಕ್ಸಿಕ್ಯೂಟಿವ್ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು.

## ಉದ್ಯೋಗ ಮತ್ತು ತರಬೇತಿ ಇಲಾಖೆ

## ಪ್ರಾಚಾರ್ಯರು, ಕೈಗಾರಿಕಾ ತರಬೇತಿ ಸಂಸ್ಥೆ, ಎನ್.ಆರ್. ಮೊಹಲ್ಲ, ಮೈಸೂರು-7

## ಟೆಂಡರ್ ಪ್ರಕಟಣೆ

**ವಿಷಯ:** ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮೈಸೂರು-7 ಇಲ್ಲಿನ ಸೈಕಲ್ ಸ್ಟ್ಯಾಂಡ್ ನಡೆಸಲು ಟೆಂಡರ್ ಕರೆದಿರುವುದು.

**ಉಲ್ಲೇಖ:** ಸಂಖ್ಯೆ: ಕೈತಸಂ:ಮೈ-7:ಆಡಳಿತ-1:ವಿನೋ-68:04-05, ದಿನಾಂಕ: 2.2.2005.

ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮೈಸೂರು-7 ಇಲ್ಲಿ ಸೈಕಲ್ ಸ್ಟ್ಯಾಂಡ್ ನಡೆಸಲು ಹಾಗೂ ಈ ಕೆಳಕಂಡ ನಿಬಂಧನೆಗಳು : ಷರತ್ತುಗಳಿಗೆ ಒಪ್ಪುವ ಟೆಂಡರ್‌ದಾರರಿಂದ ಟೆಂಡರ್‌ಗಳನ್ನು ಕರೆಯಲಾಗಿದೆ.

**ಷರತ್ತುಗಳು:**

1) ಸೈಕಲ್ ಸ್ಟ್ಯಾಂಡ್ ಗುತ್ತಿಗೆಯು ಎರಡು ವರ್ಷ ಅವಧಿ ಮಾತ್ರ ಆಗಿರುತ್ತದೆ. ಟೆಂಡರ್‌ನಲ್ಲಿ ಯಶಸ್ವಿಯಾದ ಗುತ್ತಿಗೆದಾರರು, ಪ್ರಾಚಾರ್ಯರ ಜೊತೆ ಒಪ್ಪಂದಕ್ಕೆ ಬಂದ ದಿನಾಂಕದಿಂದ ಎರಡು ವರ್ಷ ಅವಧಿ ಆಗಿರುತ್ತದೆ.
2) ಸಂಸ್ಥೆಯ ಎಲ್ಲಾ ಕೆಲಸದ ದಿನಗಳಲ್ಲೂ ಸೈಕಲ್ ಸ್ಟ್ಯಾಂಡ್ ಅನ್ನು ಬೆಳಿಗ್ಗೆ 7.30 ಗಂಟೆಯಿಂದ ರಾತ್ರಿ 6.00 ಗಂಟೆಯವರೆಗೂ ತೆರೆದಿರಬೇಕು.
3) ಟೆಂಡರುದಾರರು ಸೈಕಲ್ ಸ್ಟ್ಯಾಂಡ್ ಅನ್ನು ನಡೆಸಲು ತಿಂಗಳಿಗೆ ತಾವಿಷ್ಟು ಬಾಡಿಗೆ ಕೊಡುವುದಕ್ಕೆ ಸಿದ್ಧರಾಗಿದ್ದೇವೆ ಎಂದು ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸತಕ್ಕದ್ದು.
4) ಟೆಂಡರ್‌ದಾರರು ಟೆಂಡರ್ ಸಲ್ಲಿಸುವಾಗ ಅರ್ಜಿ ಜೊತೆಯಲ್ಲಿ ರೂ.1000-00 ಅನ್ನು ಮುಂಗಡವಾಗಿ ಡಿಪಾಸಿಟ್ ಸಂದಾಯ ಮಾಡಬೇಕು. ಟೆಂಡರ್ ಸಿಕ್ಕದಿದ್ದವರಿಗೆ ಈ ಹಣವನ್ನು ಒಂದು ತಿಂಗಳ ನಂತರ ಹಿಂದಿರುಗಿಸಲಾಗುವುದು.
5) ಹೆಚ್ಚಿಗೆ ಬಾಡಿಗೆ ಕೊಡಲು ಒಪ್ಪಿದ (ಅಂಗೀಕೃತ) ಟೆಂಡರ್‌ದಾರರು ನಾಲ್ಕು ತಿಂಗಳ ಬಾಡಿಗೆ ಹಣವನ್ನು ಠೇವಣಿಯಾಗಿ ಸಂದಾಯ ಮಾಡತಕ್ಕದ್ದು. ಈ ಹಣವನ್ನು ಟೆಂಡರ್ ಅವಧಿ ತೃಪ್ತಿಕರವಾಗಿ ಮುಗಿದನಂತರ ವಾಪಸ್ಸು ಮಾಡಲಾಗುವುದು.
6) ಅಂಗೀಕೃತ ಟೆಂಡರ್‌ದಾರರು ರೂ.50.00 ಬೆಲೆಯ ಬಾಂಡ್ ಪೇಪರ್‌ನಲ್ಲಿ ಪ್ರಾಚಾರ್ಯರೊಂದಿಗೆ ಬಾಡಿಗೆ ಹಾಗೂ ಇತರೇ ಕರಾರುಗಳ ಬಗ್ಗೆ ಒಂದು ಒಪ್ಪಂದ ಮಾಡಿಕೊಡಬೇಕು ಹಾಗೂ ಎಲ್ಲಾ ಕರಾರುಗಳಿಗೆ ಬದ್ಧರಾಗಿರಬೇಕು.
7) ಬಾಡಿಗೆ ಹಣವನ್ನು ಪ್ರತಿ ತಿಂಗಳೂ 5ನೇ ತಾರೀಖಿನೊಳಗೆ ಕಛೇರಿಗೆ ಪಾವತಿ ಮಾಡಿ ರಶೀದಿ ಪಡೆಯಬೇಕು. ಇಲ್ಲದಿದ್ದಲ್ಲಿ ಪ್ರತಿದಿನಕ್ಕೆ ರೂ.5.00 ರಂತೆ ದಂಡವನ್ನು ಕಟ್ಟಬೇಕಾಗುವುದು.
8) ಒಂದು ಪಕ್ಷ ಬಾಡಿಗೆ ಹಣವನ್ನು ತಿಂಗಳ ಕೊನೆಯ ದಿನದೊಳಗೆ ಕಟ್ಟದಿದ್ದಲ್ಲಿ ಅವರ ಠೇವಣಿ ಹಣವನ್ನು ಬಾಡಿಗೆ ಬಾಬತ್ತೆಂದು ಸರ್ಕಾರಕ್ಕೆ ಜಮಾ ಮಾಡಿ ಯಾವ ಸೂಚನೆಯೂ ಇಲ್ಲದೆ ಅವರ ಕಂಟ್ರಾಕ್ಟ್ ಅನ್ನು ರದ್ದುಪಡಿಸಲಾಗುವುದು.
9) ಲಕೋಟೆಯ ಮೇಲೆ ಸೈಕಲ್ ಸ್ಟ್ಯಾಂಡ್ ಅನ್ನು ನಡೆಸಲು ಎಂದು ನಮೂದಿಸಬೇಕು.
10) ಟೆಂಡರ್ ಅರ್ಜಿಗಳನ್ನು ಸಲ್ಲಿಸಲು **11.3.2005** ರಂದು ಕೊನೆಯ ದಿನವಾಗಿರುತ್ತದೆ. ನಂತರ ಬಂದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
11) ದಿನಾಂಕ**: 13.03.2005ರ ಸಂಜೆ 4.00 ಗಂಟೆಗೆ** ಟೆಂಡರ್‌ಗಳನ್ನು ತೆರೆಯಲಾಗುತ್ತದೆ.
12) ಟೆಂಡರ್ ಅನ್ನು ಒಪ್ಪುವ ಅಥವಾ ತಿರಸ್ಕರಿಸುವ ಬಗ್ಗೆ ಕೆಳಗೆ ಸಹಿ ಮಾಡಿರುವ ಪ್ರಾಚಾರ್ಯರ ತೀರ್ಮಾನವೇ ಅಂತಿಮವಾಗಿರುತ್ತದೆ.
13) ಸೈಕಲ್ ಸ್ಟ್ಯಾಂಡ್‌ನಲ್ಲಿ ನಿಲ್ಲಿಸುವ ಸೈಕಲ್, ಸ್ಕೂಟರ್, ಮೋಟಾರ್ ಬೈಕ್, ಕಾರು ಇತರೆಗಳ ದರವನ್ನು ಪ್ರಾಚಾರ್ಯರ ಸಮ್ಮುಖದಲ್ಲಿ ಚರ್ಚಿಸಿ ಪ್ರಾಚಾರ್ಯರ ಒಪ್ಪಿಗೆ ಪಡೆದು ದರಗಳನ್ನು ಸೂಚನಾ ಫಲಕದಲ್ಲಿ ಪ್ರಕಟಿಸಬೇಕು.
14) ಸಂಸ್ಥೆಯಲ್ಲಿ ಸುಮಾರು 700 ಕ್ಕೂ ಹೆಚ್ಚು ತರಬೇತಿದಾರರು ಹಾಗೂ 85ಕ್ಕೂ ಹೆಚ್ಚು ಸಿಬ್ಬಂದಿ ವರ್ಗದವರು ಇರುತ್ತಾರೆ.

ಪ್ರಾಚಾರ್ಯರು,

ಪಿ.ಆರ್. 109 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಎನ್.ಆರ್. ಮೊಹಲ್ಲಾ, ಮೈಸೂರು-7.

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ,

## ತುಮಕೂರು (ಪ್ರಾದೇಶಿಕ) ವಿಭಾಗ, ರಾಮಕೃಷ್ಣ ನಗರ, ಕುಣಿಗಲ್ ರಸ್ತೆ, ತುಮಕೂರು-572105

## ಹರಾಜು ಪ್ರಕಟಣೆ ಸಂಖ್ಯೆ: ಎ8.ಸೇಲ್ಸ್.ವಿವ-36/2004-05, ದಿನಾಂಕ: 6ನೇ ಜನವರಿ 2005

**ವಿಷಯ:** ಅರಣ್ಯ ಅಪರಾಧ ಪ್ರಕರಣಗಳಲ್ಲಿ ಮುಟ್ಟುಗೋಲು ಹಾಕಿಕೊಂಡಿರುವ ವಾಹನಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತರಬಯಸುವುದೇನೆಂದರೆ, ತುಮಕೂರು ಅರಣ್ಯ ವಿಭಾಗದಲ್ಲಿ ಅರಣ್ಯ ಅಪರಾಧ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಈ ಕೆಳಕಂಡ ವಾಹನಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ ಅಥವಾ ಅವರಿಂದ ಅಧಿಕಾರ ಪಡೆದಿರುವ ಅಧಿಕಾರಿಗಳು ಸದರಿ ವಾಹನಗಳನ್ನು ಎಲ್ಲಿವೆಯೋ, ಹೇಗಿವೆಯೋ ಅಂತಹ ಸ್ಥಿತಿಯಲ್ಲಿಯೇ ದಿನಾಂಕ: 14.3.2005 ರಂದು ಮಧ್ಯಾಹ್ನ 3.00 ಗಂಟೆಗೆ ಅರಣ್ಯ ವಸತಿಗೃಹ ಆವರಣ, ಬನಶಂಕರಿಯಲ್ಲಿ, ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿದ ದಿನಾಂಕದಂದು ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳವರು ನಿಗದಿಪಡಿಸಿದ ಠೇವಣಿ ಹಣ ರೂ.12,000-00 ಮುಂಗಡವಾಗಿಟ್ಟು ಇಲಾಖೆಯು ವಿಧಿಸುವ ಷರತ್ತುಗಳಿಗನುಣವಾಗಿ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

**ಅನುಸೂಚಿ**

| ಕ್ರ.ಸಂ. | ವಾಹನದ ವಿವರ | ನೋಂದಣಿ ಸಂಖ್ಯೆ | ಸ್ಥಳ, ವೇಳೆ ಮತ್ತು ದಿನಾಂಕ |
|---|---|---|---|
| 1 | ಆಟೋರಿಕ್ಷಾ | ಕೆಎ-06-3940 | ಅರಣ್ಯ ವಸತಿ ಗೃಹ ಆವರಣ ಬನಶಂಕರಿ ದಿನಾಂಕ: 14.3.2005 ರಂದು ಮಧ್ಯಾಹ್ನ 3.00 ಗಂಟೆಗೆ ಸದರಿ ದಿನದಂದು ಹರಾಜು ಯಶಸ್ವಿಯಾಗದೇ ಇದ್ದಲ್ಲಿ ದಿನಾಂಕ: 21.3.2005 ರಂದು ನಿಗದಿತ ಸಮಯ ಮತ್ತು ಅದೇ ಸ್ಥಳದಲ್ಲಿ ಮರು ಹರಾಜು ಮಾಡಲಾಗುವುದು ಇದಕ್ಕೆ ಪ್ರತ್ಯೇಕ ಪ್ರಕಟಣೆ ಹೊರಡಿಸಲಾಗುವುದಿಲ್ಲ. |
| 2 | ಆಟೋರಿಕ್ಷಾ | ಕೆಎ-06-4089 | |
| 3 | ಮಾರುತಿ ವ್ಯಾನು | ಸಿಟಿಎ-6611 | |
| 4 | ಟೆಂಪೋ ಟ್ರಾಕ್ಸ್ | ಕೆಎ-19-3629 | |
| 5 | ಅಂಬಾಸಿಡರ್ ಕಾರು | ಕೆಎ-26-1118 | |
| 6 | ಮಾರುತಿ ಕಾರು | ಕೆಎ-13-6592 | |
| 7 | ಬಜಾಜ್ ಸ್ಕೂಟರ್ | ಸಿಎಂಎಂ-6790 | |
| 8 | ಟಿವಿಎಸ್-50-ಎಕ್ಸ್‌ಎಲ್ | ಕೆಎ-06-9883 | |
| 9 | ಫಿಯಟ್ ಕಾರು | ಡಿಎಚ್‌ಡಿ-8409 | |
| 10 | ಟಿವಿಎಸ್ ಚಾಂಪ್ | ಕೆಎ-06-ಇ-3582 | |
| 11 | ಟಿವಿಎಸ್-50-ಎಕ್ಸ್‌ಎಲ್ | ಕೆಎ-11-ಜೆ-4608 | |
| 12 | ಅಂಬಾಸಿಡರ್ ಕಾರು | ಕೆಎ-06-ಎಂ-515 | |

**ಷರತ್ತುಗಳು:**

1) ಹರಾಜಿನಲ್ಲಿ ಭಾಗವಹಿಸುವವರು ರೂ.12,000-00 ಇಎಂಡಿ ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ತುಮಕೂರು ವಿಭಾಗ ರವರ ಹೆಸರಿಗೆ ಡಿಡಿಯನ್ನು ಅಥವಾ ನಗದನ್ನು ಹರಾಜಿಗೆ ಮುನ್ನ ಸಲ್ಲಿಸಬೇಕು. ಸದರಿ ಮೊತ್ತವನ್ನು ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರಾಗಿದ್ದಲ್ಲಿ ಬಿಡ್ ಮೊತಕ್ಕೆ ಸರಿಹೊಂದಿಸಿಕೊಳ್ಳಲಾಗುವುದು.
2) ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರಾಗದಿದ್ದಲ್ಲಿ ಇಎಂಡಿಯನ್ನು ಹರಾಜಿನ ನಂತರ ಹಿಂತಿರುಗಿಸಲಾಗುವುದು.
3) ಹರಾಜಿನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಹರಾಜಿಗೆ ಮುನ್ನ ಅನುಸೂಚಿಯಲ್ಲಿ ನಮೂದಿಸಿರುವ ಸ್ಥಳದಲ್ಲಿರುವ ವಾಹನವನ್ನು ಕೆಲಸದ ದಿನಾಂಕಗಳಂದು ಪರಿಶೀಲಿಸಿ ವಾಹನದ ಸ್ಥಿತಿಯ ಬಗ್ಗೆ ಖಾತ್ರಿಪಡಿಸಿಕೊಳ್ಳಬಹುದಾಗಿದೆ. ಹರಾಜಿನ ನಂತರ ಯಾವುದೇ ದೂರುಗಳನ್ನು ಪರಿಗಣಿಸಲಾಗುವುದಿಲ್ಲ.
4) ಎರಡಾವರ್ತಿಯಾದ ವಾಹನಗಳ ಹರಾಜುದಾರರು ಶೇ.50 ರಷ್ಟು ಮೊಬಲಗು ಶೇ.13 ಮಾರಾಟ ತೆರಿಗೆ ಮತ್ತು ಮಾರಾಟ ತೆರಿಗೆ ಮೇಲೆ ಶೇ.15 ಸರ್‌ಚಾರ್ಜ್‌ನ್ನು ಪಾವತಿಸತಕ್ಕದ್ದು ಬಾಕಿ ಉಳಿದ ಶೇ.50 ಮೊಬಲಗನ್ನು ಮಂಜೂರಿ ಆದೇಶ ಹರಾಜುದಾರರಿಗೆ ತಲುಪಿದ 15 ದಿವಸಗಳೊಳಗಾಗಿ ಪಾವತಿಸತಕ್ಕದ್ದು ತಪ್ಪಿದಲ್ಲಿ ಶೇ.18 ಬಡ್ಡಿ ಹಾಗೂ ನೆಲಬಾಡಿಗೆಯನ್ನು ಪಾವತಿಸಬೇಕಾಗಿರುತ್ತದೆ.
5) ಒಂದು ವೇಳೆ ಯಶಸ್ವಿ ಬಿಡ್ಡುದಾರರು ಹರಾಜಿನಲ್ಲಿ ಪಡೆದ ವಾಹನವನ್ನು ಈ ಕಛೇರಿಯಿಂದ ತಿಳಿಸಿದ 15 ದಿನಗಳ ಅವಧಿಯೊಳಗೆ ತೆಗೆದುಕೊಂಡು ಹೋಗದೇ ಇದ್ದಲ್ಲಿ ಅವರು ತುಂಬಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅವರ ಸ್ವಂತ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ಮರು ಹರಾಜಿನಿಂದ ಸರ್ಕಾರಕ್ಕೆ ನಷ್ಟ ಆದಲ್ಲಿ ಅಂತಹ ನಷ್ಟವನ್ನು ಮೂಲ ಖರೀದಿದಾರರಿಂದ ಕರ್ನಾಟಕ ಅರಣ್ಯ ಕಾಯ್ದೆ 1969 ಅಧಿನಿಯಮ 109ರ ರೀತ್ಯಾ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.
6) ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಇರುತ್ತದೆ. ಯಾವುದೇ ಕಾರಣವನ್ನು ನೀಡದೇ ಸಂಬಂಧಿಸಿದ ಅಧಿಕಾರಿಗಳು ಹರಾಜನ್ನು ತಿರಸ್ಕರಿಸಬಹುದಾಗಿರುತ್ತದೆ.
7) ವಾಹನದ ನೋಂದಾವಣೆ, ವರ್ಗಾವಣೆ ಯಶಸ್ವಿ ಬಿಡ್ಡುದಾರರ ಜವಾಬ್ದಾರಿಯಾಗಿರುತ್ತದೆ. ಆದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಇಲಾಖಾ ಸಹಕಾರವನ್ನು ನೀಡಲಾಗುವುದು.
8) ಹರಾಜು ನಿಗದಿಪಡಿಸಿರುವ ದಿನಾಂಕದಂದು ಸಾರ್ವತ್ರಿಕ ರಜೆಯಾದ ಪಕ್ಷದಲ್ಲಿ ಸದರಿ ಹರಾಜಿನ ದಿನವನ್ನು ಮುಂದಿನ ಕಛೇರಿಯ ಕೆಲಸದ ದಿನದಂದು ಅದೇ ಸಮಯ ಮತ್ತು ಅದೇ ಸ್ಥಳದಲ್ಲಿ ನಡೆಸಲಾಗುವುದು.

ಪಿ.ಆರ್. 110 ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು.

**FORM - IV**
**(See Rule 12)**
**NOTICE**

It is hereby notified that the undersigned has changed his name from **SRI THAMBU** to **SRI SHAMBU SUVARNA KODAVOOR.**

PD. 19 **SHAMBU SUVARNA KODAVOOR.**

**FORM - IV**
**(See Rule 12)**
**NOTICE**

It is hereby notified that the undersigned has changed his name from **ASHOK BHIMAPPA WAJANTRI** to **ASHOK BHIMAPPA NANDAGAON**

PD. 20 **ASHOK BHIMAPPA NANDAGAON**

**FORM - IV**
**(See Rule 12)**
**NOTICE**

It is hereby notified that the undersigned has changed his name from **S. CHARMANI** to **S. CHANDRANATH.**

PD. 21 **S. CHANDRANATH.**